# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1531
ಸದಸ್ಯರ ಹೆಸರು : ಶ್ರೀ ಕೆ.ಸಿ.ಕೊಂಡಯ್ಯ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವ ದಿನಾಂಕ : 24-09-2021
ಉತ್ತರಿಸುವ ಮಾನ್ಯ ಸಚಿವರು : ಕೃಷಿ ಸಚಿವರು

<table>
<tr><th>ಕ್ರಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಕೋವಿಡ್ ನಡುವೆಯೂ ಕೃಷಿ ರಫ್ತಿನ ಏರಿಕೆಯಾಗಿದೆಯೇ; ಹಾಗಿದಲ್ಲಿ ಅದರ ವಿವರಗಳೇನು;</td><td>ಕೋವಿಡ್ ನಡುವೆಯೂ ರಾಜ್ಯದಲ್ಲಿ ಕೃಷಿ ರಫ್ತು ಏರಿಕೆಯಾಗಿರುತ್ತದೆ. ಕೃಷಿ ಮತ್ತು ಸಂಸ್ಕರಿಸಿದ ಆಹಾರ ಉತ್ಪನ್ನಗಳ ರಫ್ತು ಅಭಿವೃದ್ಧಿ ಪ್ರಾಧಿಕಾರ(APEDA) ಸಂಸ್ಥೆಯ India Export Statistics ಮಾಹಿತಿಯನ್ವಯ ರಾಜ್ಯದಿಂದ 2020-21 ಹಾಗೂ 2021-22(ಏಪ್ರಿಲ್) ರವರೆಗೆ ರಫ್ತಾಗಿರುವ ಪ್ರಮಾಣ ಹಾಗೂ ಮೌಲ್ಯದ ವಿವರ ಕೆಳಕಂಡಂತಿದೆ:-<br><br><table><tr><th>ವರ್ಷ</th><th>ಪ್ರಮಾಣ (ಮೆ.ಟನ್)</th><th>ಮೌಲ್ಯ (ರೂ.ಕೋಟಿಗಳಲ್ಲಿ)</th></tr><tr><td>2020-21</td><td>2,81,560</td><td>3334.47</td></tr><tr><td>2021-22 (ಏಪ್ರಿಲ್ ಮಾಹೆ ಮಾತ್ರ)</td><td>23,875</td><td>257.86</td></tr></table><br>ಬೆಂಗಳೂರು ವಿಮಾನ ನಿಲ್ದಾಣ ವಾರ್ತೆ ಮತು ಪತ್ರಿಕಾ ಪ್ರಕಟಣೆಯ (Bengaluru Airport News & Press release) ಮಾಹಿತಿಯನ್ವಯ ಬೆಂಗಳೂರು ಅಂತರಾಷ್ಟ್ರೀಯ ವಿಮಾನ ನಿಲ್ದಾಣದಿಂದ 2020-21ನೇ ಸಾಲಿನಲ್ಲಿ ಒಟ್ಟಾರೆ 37,319 ಮೆ.ಟನ್ ಕೃಷಿ ಉತ್ಪನ್ನಗಳು ರಫ್ತಾಗಿದ್ದು, ಕೋವಿಡ್ ಸಂದರ್ಭದಲ್ಲಿ ಸರಾಸರಿ ರಫ್ತು 15,224 ಮೆ.ಟನ್ ರಷ್ಟು ಹೆಚ್ಚಾಗಿರುತ್ತದೆ.</td></tr>
<tr><td>ಆ)</td><td>ಪ್ರಸ್ತುತ ಹಣಕಾಸು ವರ್ಷದಲ್ಲಿ ಕೃಷಿ ರಫ್ತುಗಳನ್ನು ಹೆಚ್ಚಿಸಲು ಸರ್ಕಾರ ಯೋಜಿಸುತ್ತಿದೆಯೇ? (ವಿವರಿಸುವುದು)</td><td>ಪ್ರಸ್ತುತ ಹಣಕಾಸು ವರ್ಷದಲ್ಲಿ ಕೇಂದ್ರ ಸರ್ಕಾರದ ಕೃಷಿ ರಫ್ತು ನೀತಿಯಡಿ ದಾಳಿಂಬೆ, ಬೆಂಗಳೂರು ಗುಲಾಬಿ ಈರುಳ್ಳಿ, ಅರಿಷಿಣ, ಕರಿಮೆಣಸು, ಗರ್ಕಿನ್ಸ್ ಮತ್ತು ಕಾಫಿ ಉತ್ಪನ್ನಗಳ ರಫ್ತನ್ನು ಹೆಚ್ಚಿಸಲು ಕೃಷಿ ರಫ್ತು ವಲಯಗಳನ್ನು ಗುರುತಿಸಿ ರೂ.886.00 ಕೋಟಿಗಳ ಕ್ರಿಯಾ ಯೋಜನೆಯನ್ನು ಕೇಂದ್ರ ಸರ್ಕಾರದ ಅನುಮೋದನೆಗಾಗಿ ಸಲ್ಲಿಸಲಾಗಿದೆ.<br><br>ಮುಂದುವರೆದು, ಕೆಪೆಕ್(ಕರ್ನಾಟಕ ರಾಜ್ಯ ಕೃಷಿ ಉತ್ಪನ್ನಗಳ ಸಂಸ್ಕರಣೆ ಹಾಗೂ ರಫ್ತು ನಿಗಮ ನಿಯಮಿತ) ಸಂಸ್ಥೆಯ ವತಿಯಿಂದ ಬೆಂಗಳೂರು ವಿಮಾನ ನಿಲ್ದಾಣದ ಹತ್ತಿರವಿರುವ ಪೂಜೇನಹಳ್ಳಿ ತೋಟಗಾರಿಕಾ ಕ್ಷೇತ್ರದಲ್ಲಿ ಸಮಗ್ರ ಶೀತಲ ಸರಪಳಿ ಘಟಕವನ್ನು ನಿರ್ಮಿಸಲಾಗುತ್ತಿದ್ದು, ಕೃಷಿ ಉತ್ಪನ್ನಗಳ ರಫ್ತು ಹೆಚ್ಚಿಸಲು ಕ್ರಮ ವಹಿಸಲಾಗುತ್ತಿದೆ.</td></tr>
</table>

ಸಂಖ್ಯೆ: ಕೃಇ 123 ಕೃಕೈಉ 2021

(ಬಿ.ಸಿ.ಪಾಟೀಲ್)
ಕೃಷಿ ಸಚಿವರು